ಇ) ಈ ಗುನ್ನೆಯನ್ನು ವಾಹನದ ಮಾಲೀಕ/ಅಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) -- ಹೌದು

ಅಂಶ ನಂ. (ಆ) -- ಹೌದು

ಅಂಶ ನಂ. (ಇ) -- ಹೌದು

ಅಂಶ ನಂ. (ಈ) -- ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯು-1** ಶ್ರೀ. ಪ್ರಸಾದ ಕಲ್ಲಪ್ಪ ಗೋಖಲೆ ಇವರು ತಮ್ಮ ಸಾಕ್ಷ್ಯದಲ್ಲಿ ಈ ಪ್ರಕರಣ ದಾಖಲಾಗುವ ಕಾಲಕ್ಕೆ ನಾನು ಮಾರ್ಚ-2002 ರಿಂದ ಮೇ-2005 ರ ವರೆಗೆ ನಾನು ಕಾರವಾರ ನಗರ ಪೊಲೀಸ್ ಠಾಣೆಯ ಆರಕ್ಷಕ ಉಪನಿರೀಕ್ಷಕನಾಗಿ ಕೆಲಸ ನಿರ್ವಹಿಸಿದ್ದೇನೆ. ದಿನಾಂಕ: 21-11-2003 ರಂದು ಸಾಯಂಕಾಲ 4.00 ಗಂಟೆಗೆ ನಾನು ಠಾಣಾ ಪ್ರಭಾರದಲ್ಲಿದ್ದಾಗ ಶ್ರೀ. ಜೆ.ಆರ್. ಮಿರಾಶಿ, ಕಾರವಾರ ಶಹರ ವನಪಾಲಕರು ಠಾಣೆಗೆ ಹಾಜರಾಗಿ ಒಂದು ಲಿಖಿತ ಫಿರ್ಯಾದು ನೀಡಿದ್ದು ಅದನ್ನು ನಾನು ಸ್ವೀಕರಿಸಿ ಅದನ್ನು ನಮ್ಮ ಠಾಣಾ ಗುನ್ನಾ ನಂ. 197/2003 ಕಲಂ 353 ಐಪಿಸಿ ಮತ್ತು ಕರ್ನಾಟಕ ಅರಣ್ಯ ಕಾಯಿದೆ ಕಲಂ 24, 62, 80, 71ಎ ಹಾಗೂ 165 ಮತ್ತು ಕರ್ನಾಟಕ ಅರಣ್ಯ ನಿಯಮ 144 ರಡಿಯಲ್ಲಿ ಪ್ರಕರಣ ದಾಖಲಿಸಿಕೊಂಡು ಪ್ರ.ವಾ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಸಾಕ್ಷಿ ತಾನು ಸ್ವೀಕರಿಸಿದ ಫಿರ್ಯಾದನ್ನು ಹಾಗೂ ಪ್ರ.ವಾ ವರದಿಯ ಯಥಾ ನಕಲುಗಳನ್ನು ನೋಡಿ ಗುರುತಿಸಿದ್ದು ಅವುಗಳನ್ನು ಕ್ರಮವಾಗಿ ನಿ.ಪಿ-1 ಹಾಗೂ ನಿ.ಪಿ-2 ಎಂದು ಸಾಕ್ಷಿ ಸಹಿಯನ್ನು ನಿ.ಪಿ-1ಎ ಮತ್ತು ನಿ.ಪಿ-2ಎ ಎಂದು ಗುರುತಿಸಲಾಯಿತು. ಫಿರ್ಯಾದನ್ನು ಸ್ವೀಕರಿಸಿದಂತ ನಾನು ಆರೋಪಿತನಿಗಾಗಿ ಕಾರವಾರದ ಸದಾಶಿವಗಡದ ಕಡಪಾಶಿಟ್ಟದ ಕಡೆಗೆ ವಾಹನದಲ್ಲಿ ಹೋಗುತ್ತಿದ್ದಾಗ ಫಿರ್ಯಾದದಲ್ಲಿ ನಮೂದಿಸಿದ ವಾಹನ ರಿಕ್ಷ ನಂಬರ ಕೆಎ-30/4809ನೇದು ನಿಲ್ಲಿಸಿದ್ದು ಕಂಡು ಬಂದಿತು. ಆಟೋದ ಹತ್ತಿರ ನಿಂತಿರುವ 3 ವ್ಯಕ್ತಿಗಳನ್ನು ನಮ್ಮ ಸಂಗಡ ಇದ್ದ ಫಿರ್ಯಾದಿ ಶ್ರೀ. ಜೆ.ಆರ್. ಮಿರಾಶಿ ಇವರು ಸದರಿ ಆರೋಪಿತರು ಇವರೇ ಎಂದು ಗುರುತಿಸಿದರು. ಸದರಿ ಆಟೋ ರಿಕ್ಷಾವನ್ನು ಸಹ ಗುರುತಿಸಿದರು. ನಂತರ ಸ್ಥಳಕ್ಕೆ ಪಂಚರಾದ ದಾಮೋದರ ಗುನಗಿ ಹಾಗೂ ಪ್ರಕಾಶ ಗುನಗಿ ಇವರನ್ನು ಕರೆಯಿಸಿ ಆಟೋರಿಕ್ಷಾ ಪರಿಶೀಲಿಸಿದೆವು. ಅದರಲ್ಲಿದ್ದ ಕಟ್ಟಿಗೆ ಬಗ್ಗೆ ಆರೋಪಿತರನ್ನು ವಿಚಾರಿಸಲಾಗಿ ಅವರು ಸಾಗಾಟ ಮಾಡಲು ತಮ್ಮ ಬಳಿ ಯಾವುದೇ ಪಾಸ್ ಯಾ ಪರ್ಮಿಟ್ ಇಲ್ಲವೆಂದು ಹೇಳಿರುತ್ತಾರೆ. ಕಾರಣ, ಅಕ್ರಮವಾಗಿ ಕಟ್ಟಿಗೆಯನ್ನು ಸಾಗಿಸುತ್ತಿದ್ದ ಬಗ್ಗೆ ನಮಗೆ ಖಾತ್ರಿಯಾಗಿ ಪಂಚರ ಸಮಕ್ಷಮ ರಿಕ್ಷಾದಲ್ಲಿದ್ದ ಕಟ್ಟಿಗೆಯನ್ನು ಪರಿಶೀಲಿಸಲಾಗಿ ಅದರಲ್ಲಿ ಸಾಗವಾನಿ ಜಾತಿಯ ವಿವಿಧ ಆಕಾರದ 69 ತುಂಡುಗಳಿದ್ದು ಮತ್ತು ಭರಣಗಿ ತುಂಡುಗಳು 23 ಇದ್ದವು ಹೀಗೆ ಒಟ್ಟೂ 92 ಕಟ್ಟಿಗೆ ತುಂಡುಗಳು ಇದ್ದವು. ಇವುಗಳ ಒಟ್ಟೂ ಅಳತೆ ಅಂದಾಜು 0.531 ಘ.ಮೀ. ಆಗಿದ್ದು ಸದರಿ ತುಂಡುಗಳಿಗೆ ಎಂ. ನಿಶಾನೆಯ ಮಾರ್ಕನಿಂದ ಮಾರ್ಕ ಮಾಡಿರುತ್ತೇವೆ. ನಂತರ 92 ತುಂಡುಗಳಲ್ಲಿ ಒಂದು ಸಾಗ ಹಾಗೂ ಒಂದು ಭರಣಗಿ ಜಾತಿಯ ತುಂಡುಗಳನ್ನು ಪರೀಕ್ಷೆಗಾಗಿ ಪ್ರತ್ಯೇಕವಾಗಿ ತೆಗೆದಿರಸಲಾಯಿತು. ಸದರಿ ಕಟ್ಟಿಗೆ ತುಂಡು ಸಾಗಾಟ ಮಾಡುತ್ತಿದ್ದ ಆಟೋ ರಿಕ್ಷಾ ಸಂಖ್ಯೆ: ಕೆಎ-30/4809 ಹಾಗೂ 92 ಕಟ್ಟಿಗೆ ತುಂಡುಗಳನ್ನು ಪಂಚರ ಸಮಕ್ಷಮ ಪಂಚನಾಮೆ ಮಾಡಿ ಜಪ್ತಪಡಿಸಿಕೊಳ್ಳಲಾಯಿತು. ಪಂಚನಾಮೆಯನ್ನು ಸಾಯಂಕಾಲ 5.00 ಗಂಟೆಯಿಂದ 6.30 ಘಂಟೆಯ ವರೆಗೆ ನಮ್ಮ ಠಾಣಾ ಸಿಬ್ಬಂದಿಗಳು ಪಂಚರ ಹೇಳಿಕೆ ಮೇರೆಗೆ ಬರೆದಿರುತ್ತಾರೆ. ಪಂಚನಾಮೆ ಹಾಗೂ ತನ್ನ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಪಂಚನಾಮೆಯನ್ನು ನಿಪಿ-3 ಸಾಕ್ಷಿ ಸಹಿಯನ್ನು ನಿ.ಪಿ-3ಎ ಎಂದು ಗುರುತಿಸಲಾಯಿತು. ಸ್ಥಳದಲ್ಲಿ 3 ಜನ ಆರೋಪಿತರಾದ ಪ್ರದೀಪ ಸಾಳಗಾಂವಕರ, ದಿಗಂಬರ ಹಳದನಕರ ಹಾಗೂ ದತ್ತಾರಾಮ ಸಾಳಗಾಂವಕರ ಇವರನ್ನು ವಶಕ್ಕೆ ಪಡಕೊಂಡು ಜಪ್ತಪಡಿಸಿಕೊಂಡ ವಾಹನ ಕಟ್ಟಿಗೆ ತುಂಡುಗಳು ಆರೋಪಿತರೊಂದಿಗೆ ಠಾಣೆಗೆ ಹಿಂದುರಿಗಿ ಜಪ್ತಪಡಿಸಿದ ವಾಹನದ ಬಗ್ಗೆ ಹಾಗೂ ಕಟ್ಟಿಗೆ ತುಂಡುಗಳ ಬಗ್ಗೆ ಮಾನ್ಯ ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಸಲ್ಲಿಸಿರುತ್ತೇನೆ. ಜಪ್ತಪಡಿಸಿಕೊಂಡ ವಾಹನದ ಛಾಯಾ ಚಿತ್ರಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ-4 ಮತ್ತು 5 ಎಂದು ಗುರುತಿಸಲಾಯಿತು. ಹಾಗೂ ನ್ಯಾಯಾಲಯದ ವಾಹನವನ್ನು ನೋಡಿ ಸಾಕ್ಷಿ ಗುರುತಿಸಿದ್ದು ಅದನ್ನು ಮು.ಮಾ-1 ಎಂದು ಗುರುತಿಸಲಾಯಿತು. ಸಾಕ್ಷಿ ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ ಪಿ.ಎಫ್ ಯಥಾ ನಕಲನ್ನು ಗುರುತಿಸಿದ್ದು ಅದನ್ನು ನಿ.ಪಿ-6 ಸಾಕ್ಷಿ ಸಹಿಯನ್ನು ನಿ.ಪಿ-6ಎ ಎಂದು ಗುರುತಿಸಲಾಯಿತು. ಜಪ್ತಪಡಿಸಿಕೊಂಡ ವಾಹನವು ಆರೋಪಿತನಾದ ದತ್ತಾರಾಮ ಸದಾನಂದ ಸಾಳಗಾಂವಕರ ಇತನಿಗೆ ಸೇರಿದ್ದು ಎಂದು ನನ್ನ ತನಿಖಾ ಕಾಲಕ್ಕೆ ತಿಳಿದು ಬಂದಿತು. ಈ ಬಗ್ಗೆ ವಾಹನದ ಆರ್.ಸಿ. ಬುಕ್ಕಿನ ನಕಲನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ-7 ಎಂದು ಗುರುತಿಸಲಾಯಿತು. ನಂತರ ಈ ಪ್ರಕರಣದ ಬಗ್ಗೆ ತನಿಖೆ ಕೈಕೊಂಡು ನಾನು ಕಾರವಾರ ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ನಂತರ ನಿ.ಪಿ-6ರಲ್ಲಿ ನಮೂದಿಸಿದಂತಹ ವಾಹನ ಸಂಖ್ಯೆ: ಕೆಎ-30/4809 ಮತ್ತು ಕಟ್ಟಿಗೆ ತುಂಡುಗಳನ್ನು ಮಾನ್ಯ ನ್ಯಾಯಾಲಯವು ಅರಣ್ಯ ಇಲಾಖೆಗೆ ಕಾನೂನಿನ ಪ್ರಕಾರ ಮುಂದಿನ ಕ್ರಮಕ್ಕಾಗಿ ಹಸ್ತಾಂತರಿಸಿದ್ದು ಇರುತ್ತದೆ. ಕಾರಣ, ಸದರಿ ವಾಹನವನ್ನು ಅರಣ್ಯ ಕಳ್ಳ ಸಾಗಾಣಿಕೆಗೆ ಅಕ್ರಮವಾಗಿ ಉಪಯೋಗಿಸಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿಕೊಳ್ಳುತ್ತೇನೆ ಎಂದು ಹೇಳಿರುತ್ತಾರೆ.

**ಪಾಟೀ ಸವಾಲು:** ವಾಹನದ ಮಾಲೀಕರಿಗೆ ಈಗಾಗಲೇ ನೋಟಿಸನ್ನು ಕಳುಹಿಸಲಾಗಿದ್ದು, ಅದನ್ನು ಅವರು ಸ್ವೀಕರಿಸಿದ್ದು ಮಾನ್ಯ ನ್ಯಾಯಾಲಯಕ್ಕೆ ಹಾಜರಾಗಿದ್ದು ಇರುವದಿಲ್ಲ. ಕಾರಣ ವಾಹನದ ಮಾಲೀಕರ ಪರ ಯಾವುದೇ ಪಾಟೀ ಸವಾಲು ಇಲ್ಲಾವೆಂದು ಪರಿಗಣಿಸಲಾಯಿತು.

**ಪಿಡಬ್ಲ್ಯು-2** ಶ್ರೀ. ದಾಮೋದರ ಶಂಕರ ಗುನಗಿ ಇವರು ತಮ್ಮ ಸಾಕ್ಷ್ಯದಲ್ಲಿ ಪೊಲೀಸರು ನನ್ನ ಸಮಕ್ಷಮ ಯಾವುದೇ ಪಂಚನಾಮೆ ಮಾಡಿಲ್ಲ. ಆದರೆ ವಲಯ ಅರಣ್ಯಾಧಿಕಾರಿಗಳ ಕಚೇರಿ ಕಾರವಾರದಲ್ಲಿ ಬಂದು ಪಂಚನಾಮೆಯಲ್ಲಿ ನನ್ನ ಸಹಿಯನ್ನು ಪಡೆದುಕೊಂಡಿದ್ದಾರೆ. ಪಂಚನಾಮೆ ಹಾಗೂ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಪಂಚನಾಮೆಯನ್ನು ಈಗಾಗಲೇ ನಿ.ಪಿ-3 ಎಂದು ಗುರುತಿಸಿದ್ದು ಸಾಕ್ಷಿ ಸಹಿಯನ್ನು ನಿ.ಪಿ3ಬಿ ಎಂದು ಗುರುತಿಸಲಾಯಿತು. ನನ್ನ ಸಮಕ್ಷಮ ಪೊಲೀಸರು ಯಾವುದೇ ಗೂಡ್ಸ ರಿಕ್ಷಾವನ್ನು ಜಪ್ತಪಡಿಸಿಕೊಂಡಿರುವದಿಲ್ಲ. ನಿ.ಪಿ-4 ಮತ್ತು 5 ರಲ್ಲಿ ಇರುವ ವಾಹನವನ್ನು ನೋಡಿ ಗುರುತಿಸಲು ಆಗುವದಿಲ್ಲ. ನಿ.ಪಿ-3 ರ ವಿವರಗಳು ನನಗೆ ಗೊತ್ತಿಲ್ಲ ಎಂದು ಹೇಳಿರುತ್ತಾರೆ.

ಸಾಕ್ಷಿದಾರರು ಪ್ರತಿಕೂಲ ಸಾಕ್ಷಿ ನುಡಿದಿದ್ದರಿಂದ ಮಾನ್ಯ ಎಡಿಪಿಯವರು ಪಾಟೀ ಸವಾಲು ಮಾಡಲು ಕೋರಿದ್ದು ಅವರಿಗೆ ಪಾಟೀ ಸವಾಲು ಮಾಡಲು ಅನುಮತಿ ನೀಡಲಾಯಿತು.

**ಪಾಟೀ ಸವಾಲು ಎಡಿಪಿಯವರಿಂದ :**

ದಿನಾಂಕ: 21–11–2003 ರಂದು ಪ್ರ.ಸ–1 ರವರು ನನ್ನನ್ನು ಹಾಗೂ ಪ್ರಕಾಶ ಹೇಮು ಗುನಗಿಯವರು ಸದಾಶಿವಗಡದ ಕಡಪಾಶಿಟ್ಟಾದಲ್ಲಿ ಕರೆದುಕೊಂಡು ಹೋಗಿ ಅಲ್ಲಿ ಶ್ರೀ. ಮಿರಾಶಿಯವರು ಗುರುತಿಸಿದ ಆಟೋ ರಿಕ್ಷಾ ಸಂಖ್ಯೆ: ಕೆಎ–30/4809ನೇದನ್ನು ಪರಿಶೀಲಿಸಿದರು ಎಂದರೆ ಸರಿ. ಹಾಗೂ ಅದರಲ್ಲಿದ್ದ 69 ಸಾಗವಾನಿ ನಗಗಳನ್ನು ಹಾಗೂ 23 ಭರಣಗಿ ನಗಗಳನ್ನು ಜಪ್ತಪಡಿಸಿಕೊಂಡರು ಮತ್ತು ಸದರಿ ರಿಕ್ಷಾವನ್ನು ಸಹ ನಿ.ಪಿ–3 ಪಂಚನಾಮೆಯಡಿ ಜಪ್ತಪಡಿಸಿಕೊಂಡರು ಎಂದರೆ ಸರಿ. ಆ ಕಾಲಕ್ಕೆ ಅಲ್ಲಿ ಆಟೋದ ಹತ್ತಿರ 3ಜನರು ಇದ್ದರು ಎಂದರೆ ಸರಿ. ನಿ.ಪಿ–3 ಕ್ಕೆ ನಾನು ಸ್ಥಳದಲ್ಲಿಯೇ ಸಹಿ ಹಾಕಿದ್ದೇನೆ ಎಂದರೆ ಸರಿ. ಆದರೆ ಜಪ್ತಿಪಡಿಸಿಕೊಂಡಂತಹ ಆಟೋ ರಿಕ್ಷಾ ನಿ.ಪಿ–4 ಮತ್ತು 5ರಲ್ಲಿ ಇರುವ ಆಟೋ ರಿಕ್ಷಾ ಎಂದರೆ ಸರಿ. ನನ್ನ ಸಂಗಡ ಪ್ರಕಾಶ ತಂದೆ ಹೇಮು ಗುನಗಿ ಇವರು ಸಹ ನಿ.ಪಿ–3 ಕ್ಕೆ ಸಹಿ ಹಾಕಿದ್ದಾರೆ ಎಂದರೆ ಸರಿ ಎಂದು ಹೇಳಿರುತ್ತಾರೆ.

**ಪಿ.ಡಬ್ಲು–3** ಶ್ರೀ. ಜೋಗಿ ರಾಮಚಂದ್ರ ಮಿರಾಶಿ ಇವರು ತಮ್ಮ ಸಾಕ್ಷ್ಯದಲ್ಲಿ ಈ ಪ್ರಕರಣ ದಾಖಲಾಗುವ ಕಾಲಕ್ಕೆ ನಾನು 2000 ರಿಂದ 2005 ರ ವರೆಗೆ ಕಾರವಾರ ಶಹರ ವನಪಾಲಕನಾಗಿ ಕೆಲಸ ಮಾಡಿದ್ದೇನೆ. ದಿನಾಂಕ: 21–11–2003ರಂದು ನಾನು ಕರ್ತವ್ಯದಲ್ಲಿದ್ದಾಗ ನನಗೆ ಒಂದು ಗೂಡ್ಸ ಅಟೋ ರಿಕ್ಷಾದಲ್ಲಿ ಕೋಡಿಬಾಗ ದಿಂದ ಚಿತ್ತಾಕುಲಾ ಕಡೆಗೆ ಚಿರಾವು ಕಟ್ಟಿಗೆ ಹೇರಿಕೊಂಡು ಹೋಗುತ್ತಿದ್ದಾರೆಂದು ಬಾತ್ಮಿ ಬಂದಿತು. ನಂತರ ನಾನು ಕೂಡಲೇ ಖಾಪ್ರಿ ದೇವಸ್ಥಾನದ ಎದುರುಗಡೆ ನಿಂತು ಕಾಯುತ್ತಿದ್ದಾಗ ಬೆಳಿಗ್ಗೆ 10.30 ಗಂಟೆ ಸುಮಾರಿಗೆ ಕೋಡಿಬಾಗ ಕಡೆಗೆ ಒಂದು ಗೂಡ್ಸ ಆಟೋ ರಿಕ್ಷಾ ಬಂದಿತು ನಾನು ಕೈಸನ್ನೆ ಮಾಡಿ ಸದರಿ ಆಟೋವನ್ನು ನಿಲ್ಲಿಸಿದ್ದೇನೆ. ರಿಕ್ಷಾ ಚಾಲಕನಿಗೆ ರಿಕ್ಷಾದಲ್ಲಿ ಏನಿದೆ ಎಂದು ಕೇಳಿದಾಗಿ ಚಿರಾವು ಕಟ್ಟಿಗೆ ಇರುವ ಬಗ್ಗೆ ತಿಳಿಸಿದರು ನಾನು ಆತನ ಬಳಿ ಪಾಸ್/ಫರ್ಮಿಟ ಕೇಳಿದಾಗ ಆತ ಇಲ್ಲಾ ಎಂದು ಹೇಳಿರುತ್ತಾನೆ. ಅಷ್ಟರಲ್ಲಿ ಮತ್ತೆ ಇಬ್ಬರು ಬಂದು ನಿನಗೆ ಏಕೆ ಪಾಸು ತೋರಿಸಬೇಕೆಂದು ಕೇಳಿ ಮೂವರು ಸೇರಿ ನನ್ನ ಮೇಲೆ ಹಲ್ಲೆ ಮಾಡಿರುತ್ತಾರೆ. ಮತ್ತು ನನ್ನ ಶರ್ಟು ಎಳೆದು ಹರಿದುಹಾಕಿರುತ್ತಾರೆ. ನನಗೆ ದೂಡಿಹಾಕಿ ರಿಕ್ಷಾವನ್ನು ಚಿತ್ತಾಕುಲಾ ಕಡೆಗೆ ತೆಗೆದುಕೊಂಡು ಹೋಗಿರುತ್ತಾರೆ. ಸದರಿ ರಿಕ್ಷಾ ನಂಬರ ನೋಡಲಾಗಿ ಕೆಎ–30/4809 ಆಗಿರುತ್ತದೆ. ನಂತರ ಕೂಡಲೇ ನಾನು ಮೇಲಾಧಿಕಾರಿಗಳಿಗೆ ವಿಷಯವನ್ನು ತಿಳಿಸಿ ಕಾರವಾರ ನಗರ ಪೊಲೀಸ್ ಠಾಣೆಗೆ ಬಂದು ಆರೋಪಿತರು ನನ್ನ ಕರ್ತವ್ಯಕ್ಕೆ ಅಡ್ಡಿ ಮಾಡಿದ ಬಗ್ಗೆ ದೂರನ್ನು ದಾಖಲಿಸುತ್ತೇನೆ. ಸಾಕ್ಷಿ ಸದರಿ ದೂರನ್ನು ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–1 ಆಗಿದ್ದು ಸಾಕ್ಷಿ ಸಹಿಯನ್ನು ನಿ.ಪಿ–1ಬಿ ಎಂದು ಗುರುತಿಸಲಾಯಿತು. ನಾನು ದೂರು ನೀಡಿದ ನಂತರ ಪ್ರ.ಸ–1 ರವರು ನನ್ನನ್ನು ಹಾಗೂ ಸಿಬ್ಬಂದಿಗಳನ್ನು ಕರೆದುಕೊಂಡು ಗೂಡ್ಸ್ ರಿಕ್ಷಾ ಹಾಗೂ ಆರೋಪಿತರನ್ನು ಹುಡುಕುತ್ತಾ ಅವರ ಇಲಾಖಾ ಜೀಪಿನ ಮೇಲೆ ಹೋಗುತ್ತಿದ್ದಾಗ ಕಡಪಾಶಿಟ್ಟಾದಲ್ಲಿ ಕಚ್ಚಾ ರಸ್ತೆಯ ಮೇಲೆ ಆಟೋ ನಿಂತಿದ್ದು ನಾನು ನೋಡಿರುತ್ತೇನೆ. ನಾನು ಅದನ್ನು ಗುರುತು ಹಿಡಿದು ಪ್ರ.ಸ–1 ರವರಿಗೆ ಹೇಳಿರುತ್ತೇನೆ. ಕೂಡಲೇ ಪ್ರ.ಸ–1 ರವರು ಪಂಚರಾದ ಪ್ರಸ–2 ಹಾಗೂ ಪ್ರಕಾಶ ಗುನಗಿ ಯವರಿಗೆ ಸ್ಥಳದಲ್ಲಿ ಕರೆಯಿಸಿ ರಿಕ್ಷಾವನ್ನು ಪರಿಶೀಲಿಸುತ್ತಾರೆ. ರಿಕ್ಷಾದಲ್ಲಿ ಒಟ್ಟೂ 69 ಸಾಗವಾನಿ ತುಂಡುಗಳು ಹಾಗೂ 23 ಭರಣಗಿ ತುಂಡುಗಳು ಇದ್ದವು. ಪ್ರತಿ ತುಂಡುಗಳ ಮೇಲೆ ಎಂ. ನಿಶಾನೆಯ ಮಾರ್ಕ ಮಾಡಿಕೊಂಡು ಸ್ಯಾಂಪಲ್‌ಗಾಗಿ ಸಾಗವಾನಿ ಹಾಗೂ ಭರಣಗಿ ಜಾತಿಯ ಒಂದು ತುಂಡನ್ನು ತೆಗೆದಿರಿಸಲಾಯಿತು. ಸ್ಥಳದಲ್ಲಿ ಮೂರು ಜನ ಆರೋಪಿತರು ಹಾಜರಿದ್ದು ಸದ್ರಿ ಕಟ್ಟಿಗೆಗಳ ಬಗ್ಗೆ ಯಾವುದೇ ಪಾಸ್/ಫರ್ಮಿಟ್ ಇಲ್ಲವೆಂದು ಹೇಳಿರುತ್ತಾರೆ. ಕಾರಣ, ಸ್ಥಳದಲ್ಲಿ ಪ್ರಸ–1 ರವರು ನಿ.ಪಿ–3 ರಂತೆ ಪಂಚನಾಮೆ ಮಾಡಿ ಸದರಿ ಮರದ ತುಂಡುಗಳನ್ನು ಹಾಗೂ ರಿಕ್ಷಾ ನಂಬರ ಕೆಎ–30/4809ನೇದನ್ನು ಜಪ್ತಪಡಿಸಿಕೊಂಡಿರುತ್ತಾರೆ. ಸಾಕ್ಷಿ ಪಂಚನಾಮೆ ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–3 ಎಂದು ನಿಶಾನೆಗೊಳಿಸಲಾಗಿದೆ. ಜಪ್ತಪಡಿಸಿದ ರಿಕ್ಷಾದ ಫೋಟೊವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–4 ಮತ್ತು 5 ಎಂದು ಗುರುತಿಸಲಾಗಿದೆ. ಈ ರಿಕ್ಷಾವು ಆದಿನ ಹಾಜರಿದ್ದ ಮೂರನೇ ಆರೋಪಿ ದತ್ತಾರಾಮ ಸದಾನಂದ ಸಾಳಗಾಂವಕರ ಇತನಿಗೆ ಸೇರಿದ್ದು ಎಂದು ನನಗೆ ನಂತರದಲ್ಲಿ ಗೊತ್ತಾಯಿತು. ಸದರಿ ಮೂರು ಜನ ಆರೋಪಿತರಾದ ಪ್ರದೀಪ, ದಿಗಂಬರ ಹಾಗೂ ದತ್ತಾರಾಮ ರವರು ನನ್ನ ಸರ್ಕಾರಿ ಕರ್ತವ್ಯಕ್ಕೆ ಅಡ್ಡಿಪಡಿಸಿದ್ದು ಇರುತ್ತದೆ. ಹಾಗೂ ನನ್ನ ಮೇಲೆ ಹಲ್ಲೆ ಮಾಡಿದ್ದು ಇರುತ್ತದೆ. ಹಾಗೂ ಗೂಡ್ಸ ರಿಕ್ಷಾ ಸಂಖ್ಯೆ: ಕೆಎ–30/4809ನೇದನ್ನು ಸಾಗ ಹಾಗೂ ಭರಣಗಿ ನಗಗಳನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗ ಮಾಡಿರುತ್ತಾರೆ. ಕಾರಣ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ ಎಂದು ಹೇಳಿರುತ್ತಾರೆ.

**ಪಾಟೀ ಸವಾಲು:**

ಅರ್ಜಿದಾರರು ಅವರ ಪರ ವಕೀಲರನ್ನು ಕರೆಯಿಸಲಾಗಿ ಹಾಜರು ಇರುವದಿಲ್ಲ. ಕಾರಣ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

**ಅಂಶ ನಂ. (ಅ):**

ದಿನಾಂಕ: 21–11–2013 ರಂದು ಸಾಯಂಕಾಲ 4.00 ಘಂಟೆಯ ಸಮಯಕ್ಕೆ ಶ್ರೀ. ಪ್ರಸಾದ ಗೋಖಲೆ, ಆರಕ್ಷಕ ಉಪನಿರೀಕ್ಷಕರು, ಕಾರವಾರ ನಗರ ಪೊಲೀಸ್ ಠಾಣೆಯಲ್ಲಿ ಠಾಣಾ ಪ್ರಭಾರದಲ್ಲಿದ್ದ ಸಮಯದಲ್ಲಿ ಶ್ರೀ. ಜೆ.ಆರ್. ಮಿರಾಶಿ, ಕಾರವಾರ ಶಹರ ವನಪಾಲಕರು ಠಾಣೆಗೆ ಬಂದು ಅರಣ್ಯ ಗುನ್ನೆಗೆ ಸಂಬಂಧಿಸಿದಂತೆ ಒಂದು ಗೂಡ್ಸ್ ರಿಕ್ಷಾದಲ್ಲಿ ಕೋಡಿಬಾಗ ದಿಂದ ಚಿತ್ತಾಕುಲಾ ಕಡೆಗೆ ಚಿರಾವು ಕಟ್ಟಿಗೆ ಹೇರಿಕೊಂಡು ಹೋಗುತ್ತಿರುವ ಬಾತ್ಮಿ ಬಂದ ಮೇರೆಗೆ ನಾನು ಕೈ ಸನ್ನೆ ಮಾಡಿ ಸದರ ಆಟೋವನ್ನು ನಿಲ್ಲಿಸಿ ರಿಕ್ಷಾದಲ್ಲಿ ಏನಿದೆ ಎಂದು ಆಟೋ ಚಾಲಕನಿಗೆ ವಿಚಾರಿಸಿದಂತೆ ಚಿರಾವು ಕಟ್ಟಿಗೆ ಇರುವ ಬಗ್ಗೆ ತಿಳಿಸಿದನು. ಅದಕ್ಕೆ ಪಾಸ್/ಫರ್ಮಿಟ್ ಇದೆಯೇ ಎಂದು ಪ್ರಶ್ನಿಸಿದಾಗ ಅಷ್ಟರಲ್ಲಿ ಮತ್ತಿ ಮೂರು ವ್ಯಕ್ತಿಗಳಾದ (1) ಪ್ರದೀಪ ತಂದೆ ಸದಾನಂದ ಸಾಳಗಾಂವಕರ (2) ದಿಗಂಬರ ವಾಮನ ಹಳದನಕರ ಮತ್ತು (3) ದತ್ತಾರಾಮ ತಂದೆ ಸದಾನಂದ ಸಾಳಗಾವಂಕರ ಇವರು ಬಂದು ನನ್ನ ಮೇಲೆ ಹಲ್ಲೆ ಮಾಡಿರುವ ಬಗ್ಗೆ ಒಂದು ಲಿಖಿತ ಫಿರ್ಯಾದು ನೀಡಿದಂತೆ ಅದನ್ನು ನಾನು ಸ್ವೀಕರಿಸಿ ಫಿರ್ಯಾದಿನಲ್ಲಿ ನಮೂದಿಸಿದ ವಾಹನ ರಿಕ್ಷಾ ನೋಂದಣಿ ಸಂಖ್ಯೆ: ಕೆಎ–30/4809ರ ಶೋಧನೆಗಾಗಿ ಪಂಚರಾದ ಶ್ರೀ. ದಾಮೋದರ ಶಂಕರ ಗುನಗಿ ಸಾ: ಕಡವಾಡ ಮತ್ತು ಪ್ರಕಾಶ ಹೇಮು ಗುನಗಿ, ಸಾ: ಹಬ್ಬುವಾಡಾ, ಕಾರವಾರ ಇವರೊಡನೆ ಇಲಾಖಾ ವಾಹನದಲ್ಲಿ ಕಾರವಾರದಿಂದ ಸದಾಶಿವಗಡದ ಕಡಪಾಶಿಟ್ಟಾದ ಕಡೆಗೆ ಹೋಗಿ ಶೋಧನೆ ಮಾಡುತ್ತಿರುವ ಸಂದರ್ಭದಲ್ಲಿ ಕಡಪಾಶಿಟ್ಟಾದ ಕಚ್ಚಾ ರಸ್ತೆ ಮೇಲೆ ಒಂದು ಆಟೋ ರಿಕ್ಷಾ ನಿಂತಿದ್ದು, ಆಟೋ ರಿಕ್ಷಾದ ಹತ್ತಿರ 3 ಜನರು ಇದ್ದದ್ದು ಕಂಡು ನನ್ನ ಜೊತೆಯಲ್ಲಿದ್ದ ಫಿರ್ಯಾಧಿ ಶ್ರೀ. ಜೆ.ಆರ್. ಮಿರಾಶಿ ರವರು ತೋರಿಸಿ ನನ್ನ ಮೇಲೆ ಹಲ್ಲೆ ಮಾಡಿ, ಆಟೋ ರಿಕ್ಷಾವನ್ನು ಹೊಡೆದುಕೊಂಡು ಬಂದವರು ಇವರೇ ಇಂದು ಹೇಳಿದಂತೆ ಕೂಡಲೇ ನಾನು ಪಂಚರ ಸಮಕ್ಷಮ ಆರೋಪಿತರಿಗೆ ಹಿಡಿದು ಗುನ್ನೆಯ ಬಗ್ಗೆ ವಿಚಾರಿಸಿದಾಗ ಗುನ್ನೆ ಮಾಡಿದ ಬಗ್ಗೆ ಒಪ್ಪಿಕೊಂಡರು. ಸದರ ಆಟೋ ರಿಕ್ಷಾದಲ್ಲಿದ್ದ ಚಿರಾವು ಕಟ್ಟಿಗೆ ಬಗ್ಗೆ ಪಾಸ್ ಯಾ ಫರ್ಮಿಟ್ ಇದೆಯೇ ಅಂತ ಕೇಳಿದಾಗ ಇಲ್ಲವಾಗಿ ಹೇಳಿರುತ್ತಾರೆ. ಸದರ ರಿಕ್ಷಾದಲ್ಲಿದ್ದ ಚಿರಾವು ಕಟ್ಟಿಗೆ ಪರಿಶೀಲಿಸಿ ನೋಡಲಾಗಿ ಅವು ಸಾಗ 69=0.264 ಘ.ಮೀ. ಮತ್ತು ಭರಣಗಿ ನಗಗಳು 23=0.267 ಘ.ಮೀ. ಇದ್ದವು. ಅವುಗಳಲ್ಲಿ ಸದರ ಎಲ್ಲಾ ತುಂಡುಗಳಿಗೆ ಎಂ.ನಿಶಾನೆ ಮಾರ್ಕ ಮಾಡಲಾಯಿತು. ಸದರ ಸಾಗ ಮತ್ತು ಭರಣಗಿ ತುಂಡುಗಳ ಪೈಕಿ ಒಂದೊಂದು ತುಂಡನ್ನು ಪರೀಕ್ಷೆಯ ಕುರಿತು ಪ್ರತ್ಯೇಕವಾಗಿ ತೆಗೆದಿರಿಸಲಾಯಿತು. ಹಾಗೂ ಸದರ ಚಿರಾವು ಕಟ್ಟಿಗೆ ಮತ್ತು ಅದನ್ನು ಸಾಗಾಟ ಮಾಡಲು ಉಪಯೋಗಿಸಿದ ಗೂಡ್ಸ ರಿಕ್ಷಾ ವಾಹನಸಂಖ್ಯೆ:ಕೆಎ–30/4809ನ್ನು ಕೂಡಾ ಜಪ್ತಪಡಿಸಿಕೊಂಡೆವು. ಈ ಕುರಿತು ಪಿ.ಎಸ್.ಐ ಕಾರವಾರ ಇವರು ಕಲಂ 353 IPC & 24, 62, 80, 71(A), KF Act & 144 K.F.

Rule ಪ್ರಕಾರ ಶಹರ ಪೊಲೀಸ್ ಠಾಣಾ ಗುನ್ನಾ ನಂ. 197/2003, ದಿನಾಂಕ:21–11–2003 ರಂತೆ ಗುನ್ನೆ ದಾಖಲಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಅರಣ್ಯ ಗುನ್ನೆಯಲ್ಲಿ ಬಳಸಿದ ಬಗ್ಗೆ (ನಿ.ಪಿ– 1ರಿಂದ ನಿ.ಪಿ–7) ಹಾಜರುಪಡಿಸಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲು–1 ರಿಂದ ಪಿಡಬ್ಲು–3** ಇವರು ತಮ್ಮ ಸಾಕ್ಷದಲ್ಲಿ ನಿ.ಪಿ–3ಕ್ಕೆ ಓದಿ ಸಹಿ ಹಾಕಿದ ಬಗ್ಗೆ ತಮ್ಮ ಪಾಟೀ ಸವಾಲಿನ ಉತ್ತರದಲ್ಲಿ ಹೇಳಿದ್ದು ಇದರಿಂದ ಗೂಡ್ಸ್ ರಿಕ್ಷಾ ವಾಹನದಲ್ಲಿ 69 ಸಾಗವಾನಿ ಹಾಗೂ 23 ಭರಣಗಿ ತುಂಡುಗಳು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ದಿನಾಂಕ: 21–11–2013 ರಂದು ಕಾರವಾರ ನಗರ ಪೊಲೀಸ್ ಠಾಣೆಯ ಆರಕ್ಷಕ ಉಪನಿರೀಕ್ಷಕ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 197/2003 ಮತ್ತು ಪಂಚನಾಮೆಯನ್ನು **(ನಿ.ಪಿ–2 ಮತ್ತು ನಿ.ಪಿ–3)** ಪರಿಶೀಲಿಸಲಾಗಿದೆ. ಆರೋಪಿತ ಅರ್ಜಿದಾರ/ವಾಹನ ಮಾಲೀಕ ಸ್ವತ: ತನ್ನ ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA-30/4809 ನೇದರಲ್ಲಿ ಅನಧಿಕೃತವಾಗಿ ಯಾವುದೇ ಪಾಸ್ ಯಾ ಪರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಸಾಗ ಮತ್ತು ಭರಣಗಿ ಜಾತಿಯ ತುಂಡುಗಳನ್ನು ಕಳ್ಳಸಾಗಾಣಿಕೆಯಿಂದ ಸಾಗಿಸುವಾಗ ಸಿಕ್ಕಿಬಿದ್ದಿರುತ್ತಾರೆ ಎಂಬುದು ಖಚಿತವಾಗುತ್ತದೆ. ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA-30/4809 ನೇದರಲ್ಲಿ ಅನಧಿಕೃತವಾಗಿ ಪಾಸ್ ಯಾ ಪರ್ಮಿಟ್ ಇಲ್ಲದೇ ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರ್ ಇಲ್ಲದ ಸಾಗ ಮತ್ತು ಭರಣಗಿ ತುಂಡುಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ. ಇಲ್ಲಿ ಅಪರಾಧಿಯೇ ಸ್ವತ: ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಕಾನೂನು ಅಧಿಕಾರಿಗಳು (ಕಿ) ರವರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಕಾನೂನು ಅಧಿಕಾರಿಗಳು (ಕಿ) ರವರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಕಾನೂನು ಅಧಿಕಾರಿಗಳು (ಕಿ) ರವರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಗೂಡ್ಸ್ ರಿಕ್ಷಾ ವಾಹನಸಂಖ್ಯೆ: KA-30/4809 ಇದು ದಿನಾಂಕ: 21–11–2003 ರಂದು ಪ್ರಥಮ ಮಾಹಿತಿ ಸಂಖ್ಯೆ: 197/2003, ದಿನಾಂಕ: 21–11–2003 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ 60 ತುಂಡುಗಳು ಹಾಗೂ ಭರಣಗಿ 23 ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಗೂಡ್ಸ ರಿಕ್ಷಾ ವಾಹನಸಂಖ್ಯೆ: KA-30/4809 ಮತ್ತು ಅದರಲ್ಲಿದ್ದ ಸಾಗವಾನಿ ತುಂಡುಗಳು 69=0.264 ಘ.ಮೀ. ಮತ್ತು ಭರಣಗಿ ತುಂಡುಗಳು 23=0.267 ಘ.ಮೀ. ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/4809 |
| 2) | ಇಂಜಿನ್ ನಂಬರ | : | S3 CL033292 |
| 3) | ಚಾಸಿ ನಂಬರ | : | 543-7032152CL |
| 4) | ವಾಹನದ ಮಾದರಿ | : | ಗೂಡ್ಸ್ ರಿಕ್ಷಾ (ಮೂರು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:24–07–2015 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

PR-948

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಕಾರವಾರ ವಿಭಾಗ, ಕಾರವಾರ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### “ತಿದ್ದುಪಡಿ ಅಧಿಸೂಚನೆ”

**ಸಂಖ್ಯೆ: ಸಿಐ 203 ಎಸ್‌ಪಿಕ್ಯೂ 2013, ಬೆಂಗಳೂರು, ದಿನಾಂಕ: 04.12.2015**

ಸರ್ಕಾರವು ಕೆ.ಐ.ಎ.ಡಿ. ಕಾಯ್ದೆ, 1966ರ ವಿಧೀ 28(4)ರಡಿಯಲ್ಲಿ ತನ್ನ ಅಧಿಸೂಚನೆ ಸಂಖ್ಯೆ: ಸಿಐ 322 ಎಸ್‌ಪಿಕ್ಯೂ 2010, ದಿನಾಂಕ: 23.07.2010ರನ್ವಯ ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕೋರಾ ಹೋಬಳಿ, ವಸಂತನರಸಾಪುರ ಮತ್ತಿತರ 8 ಗ್ರಾಮಗಳಲ್ಲಿ ಒಟ್ಟು 1424–29½ ಎಕರೆ ಜಮೀನುಗಳನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ ಸ್ವಾಧೀನಪಡಿಸಿಕೊಂಡಿದ್ದು, ಈ ಅಧಿಸೂಚನೆಯಲ್ಲಿ ತಿಪ್ಪೇದಾಸರಹಳ್ಳಿ ಗ್ರಾಮದ ಸರ್ವೆ ನಂ: 14ರಲ್ಲಿ 63–30 ಎಕರೆ ಸರ್ಕಾರಿ ಜಮೀನಾಗಿದ್ದು, ಮತ್ತು ಬಹುಜನಹಳ್ಳಿ ಗ್ರಾಮದ ಸರ್ವೆ ನಂ: 10ರ ಪೈಕಿ 8–00 ಎಕರೆ ಸರ್ಕಾರಿ ಜಮೀನಾಗಿದ್ದು, ಈ ಸರ್ವೆ ನಂಬರ್ ಜಮೀನಿನಲ್ಲಿ ದರಖಾಸ್ತು ಮೂಲಕ ಹಲವು ಜನರಿಗೆ ಜಮೀನು ಮಂಜೂರಾಗಿರುತ್ತದೆ. ಈ ಮಂಜೂರಿ ದಾಖಲೆಗಳನ್ನು ಅನುಸರಿಸಿ, ಜೆ.ಎಂ.ಸಿ. ಕೆಲಸ ನಿರ್ವಹಿಸಲಾಗಿರುತ್ತದೆ.

ಈ ಮಂಜೂರಿದಾರರು ಪರಿಹಾರ ಕೋರಿ ಅರ್ಜಿ ಸಲ್ಲಿಸಿದ್ದರಿಂದ ಜೆ.ಎಂ.ಸಿ. ವರದಿಗೂ ವಿಧಿ 28(4)ರ ಅಧಿಸೂಚನೆಗೂ ವ್ಯತ್ಯಾಸವಿರುವುದರಿಂದ ಮತ್ತು ಮಂಜೂರಿ ನೈಜತೆ ಬಗ್ಗೆ ದಾಖಲೆಗಳನ್ನು ಪರಿಶೀಲಿಸಿ, ಜೆ.ಎಂ.ಸಿ. ವರದಿಯನ್ನು ತಹಶೀಲ್ದಾರ್, ತುಮಕೂರು ಇವರು ಕಳುಹಿಸಿರುವುದರಿಂದ ಜೆ.ಎಂ.ಸಿ. ವರದಿಯನ್ನು ಅನುಸರಿಸಿ, ದಿನಾಂಕ: 23.07.2010ರಂದು ಹೊರಡಿಸಿರುವ 28(4)ರ ಅಧಿಸೂಚನೆಗೆ ಈ ಕೆಳಗಿನಂತೆ ತಿದ್ದುಪಡಿ ಅಧಿಸೂಚನೆಯನ್ನು ಹೊರಡಿಸುವ ಅವಶ್ಯಕತೆ ಕಂಡುಬರುತ್ತದೆ.

ಸಂಖ್ಯೆ: ಸಿಐ 203 ಎಸ್‌ಪಿಕ್ಯೂ 2013, ದಿನಾಂಕ: 18.03.2015ರಂದು ಕಲಂ 28(1)ರ ತಿದ್ದುಪಡಿ ಅಧಿಸೂಚನೆ ಹೊರಡಿಸಲಾಗಿದೆ. ಜೆ.ಎಂ.ಸಿ. ವರದಿ ಅನುಸರಿಸಿ, ದಿನಾಂಕ: 23.07.2010ರಂದು ಹೊರಡಿಸಿರುವ ಕಲಂ 28(4)ರ ಅಧಿಸೂಚನೆಗೆ ಈ ಕೆಳಗಿನಂತೆ ತಿದ್ದುಪಡಿ ಅಧಿಸೂಚನೆ ಹೊರಡಿಸಲಾಗಿದೆ.

**ಗ್ರಾಮ : ತಿಪ್ಪೇದಾಸರಹಳ್ಳಿ** **ಹೋಬಳಿ : ಕೋರ** **ತಾಲ್ಲೂಕು : ತುಮಕೂರು** **ಜಿಲ್ಲೆ : ತುಮಕೂರು**

| ವಿಧಿ 28(4)ರ ಅಧಿಸೂಚನೆಯಂತೆ | | | | | | ತಿದ್ದುಪಡಿಯಂತೆ | | | | | |
|---|---|---|---|---|---|---|---|---|---|---|---|
| ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | | ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | |
| | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು | | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು |
| 1 | 2 | 3 | 4 | 5 | 6 | 1 | 2 | 3 | 4 | 5 | 6 |
| 41 | ಸರ್ಕಾರಿ ಗೋಮಾಳ | 14 | 63–30 | 63–30 | – | 1. | 1) ಮುದ್ದಯ್ಯ ಬಿನ್ ದೊಡ್ಡಯ್ಯ | 14 | 2–00 | – | 2–00 |
| | | | | | | | 2) ಕಂಬಯ್ಯ ಬಿನ್ ಪುಟ್ಟನರಸಯ್ಯ | | 2–00 | – | 2–00 |
| | | | | | | | 3) ಲಕ್ಷ್ಮಮ್ಮ ಕೋಂ ಹನುಮಯ್ಯ | | 2–00 | – | 2–00 |
| | | | | | | | 4) ರಂಗಯ್ಯ ಬಿನ್ ರಂಗಯ್ಯ | | 2–00 | – | 2–00 |
| | | | | | | | 5) ವೆಂಕಟಪ್ಪ ಬಿನ್ ಗಿರಿಯಪ್ಪ | | 2–00 | – | 2–00 |
| | | | | | | | 6) ಹನುಮಂತರಾಯಪ್ಪ ಬಿನ್ ಲೇಟ್ ನರಸಿಂಹಯ್ಯ | | 2–00 | – | 2–00 |

| ವಿಧಿ 28(4)ರ ಅಧಿಸೂಚನೆಯಂತೆ | | | | | | ತಿದ್ದುಪಡಿಯಂತೆ | | | | | |
|---|---|---|---|---|---|---|---|---|---|---|---|
| ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | | ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | |
| | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು | | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು |
| 1 | 2 | 3 | 4 | 5 | 6 | 1 | 2 | 3 | 4 | 5 | 6 |
| | | | | | | | 7) ಹನುಮಂತಯ್ಯ ಬಿನ್ ಪುಟ್ಟಯ್ಯ,<br>ಕೆ.ಪಿ.ನರಸಿಂಹಯ್ಯ ಬಿನ್ ಪುಟ್ಟಯ್ಯ,<br>ನರಸಪ್ಪ ಬಿನ್ ಪುಟ್ಟಯ್ಯ, | | 2–00 | – | 2–00 |
| | | | | | | | 8) ಶಿವಲಿಂಗಯ್ಯ ಬಿನ್ ವೆಂಕಟೇಶಯ್ಯ | | 2–00 | – | 2–00 |
| | | | | | | | 9) ಸಣ್ಣ ಭೀಮಯ್ಯ ಬಿನ್<br>ಹನುಮಂತಯ್ಯ | | 2–00 | – | 2–00 |
| | | | | | | | 10) ವೆಂಕಟಪ್ಪ ಬಿನ್ ಗಿರಿಯಪ್ಪ | | 2–00 | – | 2–00 |
| | | | | | | | 11) ರಾಮಯ್ಯ ಬಿನ್ ಭೀಮಯ್ಯ<br>ದೊಡ್ಡರಂಗಯ್ಯ ಬಿನ್ ನಾಗಪ್ಪ | | 1–00<br>1–00 | –<br>– | 1–00<br>1–00 |
| | | | | | | | 12) ದೊಡ್ಡಮಲ್ಲಯ್ಯ ಬಿನ್ ಸಿದ್ದಯ್ಯ | | 2–00 | – | 2–00 |
| | | | | | | | 13) ರಂಗಸ್ವಾಮಯ್ಯ ಬಿನ್ ರಂಗಪ್ಪ<br>ಸಾಕಮ್ಮ ಕೋಂ ರಂಗಸ್ವಾಮಯ್ಯ | | 1–20 | – | 1–20 |
| | | | | | | | 14) ದೊಡ್ಡಯ್ಯ ಬಿನ್ ಜೋಗಪ್ಪ | | 2–07 | – | 2–07 |
| | | | | | | | 15) ತಿಮ್ಮಕ್ಕ ಕೋಂ ನಂಜುಂಡಯ್ಯ,<br>ರಾಮಚಂದ್ರಯ್ಯ ಬಿನ್ ತಿಮ್ಮಕ್ಕ,<br>ಸಿದ್ದೇಶ್ ಮೈಗಾ, ತಾಯಿ ತಿಮ್ಮಕ್ಕ | | 2–00 | – | 2–00 |
| | | | | | | | 16) ಸಿದ್ದಯ್ಯ ಬಿನ್ ಓಬಳಯ್ಯ | | 2–00 | – | 2–00 |
| | | | | | | | 17) ರಂಗಪ್ಪ ಬಿನ್ ರಂಗದಾಸಪ್ಪ | | 2–00 | – | 2–00 |

| ವಿಧಿ 28(4)ರ ಅಧಿಸೂಚನೆಯಂತೆ | | | | | | ತಿದ್ದುಪಡಿಯಂತೆ | | | | | |
|---|---|---|---|---|---|---|---|---|---|---|---|
| ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು | ಗೆಜೆಟ್ ಕ್ರ.ಸಂ. | ಖಾತೆದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು |
| **1** | **2** | **3** | **4** | **5** | **6** | **1** | **2** | **3** | **4** | **5** | **6** |
| | | | | | | | 18) ಹಳ್ಳಿರಂಗಯ್ಯ ಬಿನ್ ಚಿಕ್ಕಣ್ಣ | | 2–00 | – | 2–00 |
| | | | | | | | 19) ಸರ್ಕಾರಿ ಗೋಮಾಳ | | 28–03 | 28–03 | – |
| | | | | | | | **ಒಟ್ಟು** | | **63–30** | **28–03** | **35–27** |
| **ಗ್ರಾಮ : ಬಹುಜನಹಳ್ಳಿ ಹೋಬಳಿ : ಕೋರ ತಾಲ್ಲೂಕು : ತುಮಕೂರು ಜಿಲ್ಲೆ : ತುಮಕೂರು** | | | | | | | | | | | |
| 9 | ಸರ್ಕಾರಿ ಗೋಮಾಳ | 10ರ ಪೈಕಿ | 5–30 | 5–30 | – | 1. | ಕೆಂಪಯ್ಯ ಬಿನ್ ರಂಗಯ್ಯ ಮತ್ತು ಪುಟ್ಟನರಸಮ್ಮ ಕೋಂ ರಂಗಯ್ಯ | 10ರ ಪೈಕಿ | 4–35 | 1–15 | 3–20 |
| | | | | | | 2. | ಸರ್ಕಾರಿ ಗೋಮಾಳ | | 1–28 | 1–28 | – |
| | | | | | | 3. | ಸರ್ಕಾರಿ ಗೋಮಾಳ | | 1–17 | 1–17 | – |
| | | | | | | | **ಒಟ್ಟು** | | 8–00 | 4–20 | **3–20** |

**–: ಘೋಷ್ವಾರೆ :–**

| ಕ್ರ. ಸಂ. | ಗ್ರಾಮ | ವಿಸ್ತೀರ್ಣ (ಎ–ಗುಂ) | ಖರಾಬು (ಎ–ಗುಂ) | ಐನ್ (ಎ–ಗುಂ) |
|---|---|---|---|---|
| 1. | ತಿಪ್ಪೇದಾಸರಹಳ್ಳಿ | 63–30 | 28–03 | 35–27 |
| 2. | ಬಹುಜನಹಳ್ಳಿ | 8–00 | 4–20 | 3–20 |
| | | **71–30** | **32–23** | **39–07** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ರಾಮಕೃಷ್ಣ,**
ಸರ್ಕಾರದ ಅಧೀನ ಕಾರ್ಯದರ್ಶಿ, (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**P.R. 1046**
**SC-60**

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 413 ಎಲ್‌ಜಿಬಿ 2015, ಬೆಂಗಳೂರು, ದಿನಾಂಕ: 08–12–2015**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96.**

ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ: 05–03–2015ರ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ರವರ ಸಂಖ್ಯೆ:ಎಲ್‌ಎನ್‌ಡಿ(ಎನ್‌ಎ)ಸಿಆರ್/763/13–14 ದಿನಾಂಕ: 23–12–2014 ಕ್ರಮ ಸಂಖ್ಯೆಯ ಪ್ರಕಟಣೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ "ಗುಂಡುತೋಪು" ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲಾತಿ ಹಾಗೂ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ ಇವರ ವರದಿ ಮೇರೆಗೆ ಪರಿಶೀಲಿಸಿದ ನಂತರ ಗುಂಡುತೋಪು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ವೆಂಕಟಾಲ |
| ತಾಲ್ಲೂಕು | ಬೆಂಗಳೂರು ಉತ್ತರ (ಅಪರ) ತಾಲ್ಲೂಕು |
| ಜಿಲ್ಲೆ | ಬೆಂಗಳೂರು ನಗರ ಜಿಲ್ಲೆ |
| ಸದರಿ ಭಾಗದ ವರ್ಣನೆ | ಸರ್ವೆ ನಂ.24ರಲ್ಲಿ 1–09 ಗುಂಟೆ ಸರ್ಕಾರಿ ಗುಂಡು ತೋಪು |
| ಸರಿ ಸುಮಾರು ವಿಸ್ತೀರ್ಣ | ಸರ್ವೆ ನಂ.24ರಲ್ಲಿ 0–01 ಗುಂಟೆ |
| ಸಾರ್ವಜನಿಕ ರಸ್ತೆ / ಬೀದಿ /ಗಲ್ಲಿ / ದಾರಿ ಅಥವಾ ಅದರ ಭಾಗ | ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ವೆಂಕಟಾಲ ಗ್ರಾಮದ ಸ.ನಂ.24 ರಲ್ಲಿ 0–01 ಗುಂಟೆ ಸರ್ಕಾರಿ ಗುಂಡುತೋಪು ಜಮೀನು. |
| ಮೇರೆಗಳು | ಪೂರ್ವಕ್ಕೆ – ಬೆಂಗಳೂರಿನಿಂದ ದೇವನಹಳ್ಳಿ ರಸ್ತೆ<br>ಪಶ್ಚಿಮಕ್ಕೆ – ಸರ್ವೆ ನಂ.25<br>ಉತ್ತರಕ್ಕೆ – ರಿ.ಸ.ನಂ.24ರ ಉಳಿಕೆ ಜಮೀನು<br>ದಕ್ಷಿಣಕ್ಕೆ – ರಿ.ಸ.ನಂ.25ರ ರಸ್ತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಉಮಾದೇವಿ

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–1).

PR. 1045

SC-25

## ವಾಣಿಜ್ಯ ತೆರಿಗೆಗಳ ಇಲಾಖೆ

### ವಾಣಿಜ್ಯ ತೆರಿಗೆ ಉಪ ಆಯುಕ್ತರು (ಲೆಕ್ಕಪರಿಶೋಧನೆ)–1, ಮೈಸೂರು, ಇವರ ಕಛೇರಿಯ ನಡವಳಿಗಳು

**ಪ್ರಸ್ತುತ :** ಡಾ॥ ಬಿ.ಟಿ. ಬಾಣೇಗೌಡ,
ವಾಣಿಜ್ಯ ತೆರಿಗೆ ಉಪ ಆಯುಕ್ತರು,
(ಲೆಕ್ಕಪರಿಶೋಧನರ)–1,
ಮೈಸೂರು.

**ವಿಷಯ :** ಮೆ: ಬಾಲಾಜಿ ಆಟೋಟೆಕ್ ಪ್ರೈ. ಲಿ,. (ಟಿನ್ 29290489751) ಇವರ 'ಸಿ' ನಮೂನೆಗಳು ಕಳೆದುಹೋಗಿರುವ ಬಗ್ಗೆ.

**ಉಲ್ಲೇಖ :** 1) ವರ್ತಕರ ಮನವಿ ಪತ್ರ ದಿನಾಂಕ: 11/05/2015.
2) ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು, 1957 ನಿಯಮ 12(2)

**ಪ್ರಸ್ತಾವನೆ :**

ಮೆ: ಬಾಲಾಜಿ ಆಟೋಟೆಕ್ ಪ್ರೈವೇಟ್ ಲಿಮಿಟೆಡ್, ಮೈಸೂರು ಕಮಾತೆ ಸಂಖ್ಯೆ 20530456/ ಕೇಮಾತೆ. 20580459 (ಟಿನ್ 29290489751) ಇವರು ಉಲ್ಲೇಖ (1)ರ ಪತ್ರದಲ್ಲಿ ಸದರಿಯವರು ಮೇ: ಅಡ್ವಾನ್ಸ್ ಕೂಲಿಂಗ್ ಸಿಸ್ಟಮ್ ಪ್ರೈವೇಟ್ ಲಿಮೀಟೆಡ್, ಮುಂಬೈ–700102 ಕೇಂದ್ರ ಮಾರಾಟ ತೆರಿಗೆ ನೋಂದಣಿ ಸಂಖ್ಯೆ 27140002296ಸಿ ಇವರಿಗೆ ಪೂರ್ಣವಾಗಿ ಭರ್ತಿ ಮಾಡಿ ನೀಡಲಾಗಿದ್ದ ಸಿ ನಮೂನೆಯ ಮೂಲ ಪತ್ರ ಸಂಖ್ಯೆ ಟಿ.ಸಿ.ಕೆ 2824807 (ಒಂದು ನಮೂನೆ) ಕಳೆದು ಹೋಗಿರುವ ಹಿನ್ನೆಲೆಯಲ್ಲಿ ನಕಲಿ ಸಿ ನಮೂನೆಗಳನ್ನು ನೀಡಬೇಕೆಂದು ಕೋರಿ ಪೂರಕವಾಗಿ ಕೆಳಕಂಡ ದಾಖಲೆಗಳನ್ನು ಕಛೇರಿಗೆ ಸಲ್ಲಿಸಿರುತ್ತಾರೆ.

1) ಮೆ: ಅಡ್ವಾನ್ಸ್ ಕೂಲಿಂಗ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್, ಮುಂಬೈ ಇವರು ಮಹಾರಾಷ್ಟ್ರ ದಿನಪತ್ರಿಕೆಗಳಾದ ದ ಫ್ರೀ ಪ್ರಸ್ ಜರ್ನಲ್ ಮತ್ತು ನವ ಶಾಕ್ ಎಂಬ ದಿನಪತ್ರಿಕೆಗಳಲ್ಲಿ ದಿನಾಂಕ 11 ಡಿಸೆಂಬರ್ 2013 ರಂದು ಪತ್ರಿಕಾ ಪ್ರಕಟಣೆ ನೀಡಿರುವ ಪತ್ರಕೆಗಳ ಜೆರಾಕ್ಸ್ ಪ್ರತಿಗಳು.
2) 'ಸಿ' ನಮೂನೆ ಕಳದುಹೋಗಿರುವುದಕ್ಕೆ ಸ್ಥಳೀಯ ಠಾಣಾಧಿಕಾರಿ, ಪೊಲೀಸ್ ಠಾಣಾ ಅಮಲ್‌ದಾರ್, ರಬಲೆ ಎಂ. & ಡಿ.ಸಿ., ಪೊಲೀಸ್ ಠಾಣಾ ನ್ಯೂ ಮುಂಬೈ ಮಹಾರಾಷ್ಟ್ರ, ಇವರಲ್ಲಿ ದಾಖಲಿಸಿರುವ ಎಫ್.ಐ.ಆರ್ ಪ್ರತಿ.
3) ಸದರಿ "ಸಿ" ನಮೂನೆಗೆ ಸಂಬಂಧಿಸಿದ ತೆರಿಗೆ ಬಾಧ್ಯತೆ ಭರಿಸುವುದಾಗಿ ಮೆ: ಅಡ್ವಾನ್ಸ್ ಕೂಲಿಂಗ್ ಸಿಸ್ಟಮ್ ಪ್ರೈವೇಟ್ ಲಿಮಿಟೆಡ್, ಇವರು ನೀಡಿರುವ Indemnity Bond ಪ್ರತಿ
4) ಮೆ: ಬಾಲಾಜಿ ಆಟೋಟೆಕ್ ಪ್ರೈವೇಟ್ ಲಿಮಿಟೆಡ್, ಮೈಸೂರು ಇವರು ಇ ಪ್ರಕರಣದಲ್ಲಿ ತೆರಿಗೆ ಬಾಧ್ಯತೆ ಬಂದ ಪಕ್ಷದಲ್ಲಿ ತೆರಿಗೆಯನ್ನು ಇಲಾಖೆಗೆ ಭರಿಸುವುದಾಗಿ ಪ್ರಮಾಣೀಕರಿಸಿ ಸಲ್ಲಿಸಿರುವ Indemnity Bond ಜೆರಾಕ್ಸ್ ಪ್ರತಿ.

**ಆದೇಶ ಸಂಖ್ಯೆ: ವಾಣಿಜ್ಯ ತೆರಿಗೆ ಉಪ ಆಯುಕ್ತರು, (ಲೆ.ಪ) –1, ಮೈ.ಸಂ. 01/2015–16, ದಿನಾಂಕ: 22–09–2015.**

ಪ್ರಸ್ತಾವನೆಯಲ್ಲಿ ಚರ್ಚಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೇಂದ್ರ ಮಾರಾಟ ತೆರಿಗೆ ನಿಯಮ, 12(2)ರಂತೆ ಮೆ: ಬಾಲಾಜಿ ಆಟೋಟೆಕ್ ಪ್ರೈವೇಟ್ ಲಿಮಿಟೆಡ್, ಮೈಸೂರು ಇವರಿಗೆ ಈ ಕಛೇರಿಯಿಂದ ನೀಡಲಾಗಿದ್ದ 'ಸಿ' ನಮೂನೆ ಸಂಖ್ಯೆ ಟಿ.ಸಿ.ಕೆ 2824807(ಒಟ್ಟು ಒಂದು ನಮೂನೆ ಮಾತ್ರ) ರದ್ದುಗೊಳಿಸಿ ಆದೇಶಿಸಲಾಗಿದೆ.

ವಾಣಿಜ್ಯ ತೆರಿಗೆ ಉಪ ಆಯುಕ್ತರು,
(ಮೌಲ್ಯವರ್ಧಿತ ತೆರಿಗೆ, ಲೆಕ್ಕ ಪರಿಶೋಧನೆ–1)
ಮೈಸೂರು.

## COMMERCIAL TAXES DEPARTMENT

### OFFICE OF THE DEPUTY COMMISSIONER OF COMMERICAL TAXES (AUDIT-1) MYSURU, SHESHADRI BUILDING, DEWAN'S ROAD, MYSURU-570024.

**NOTIFICATION NO. DCCT. (AUDIT-1) MYS,/2015-16, DATED 22-9-2015.**

Notified Authority Under Rules, 6 (e) and (i) of Central Sales Tax (Karnataka) Rules 1957.

By vertue of the provisions of Rule, 12(2) of the CST (R&T) Rules, 1957, it is hereby notified for general information that the declaration in "C" Forms shown below are declared to be lost in the custody of selling dealer and also to be absolete and invalied.

| Sl No. | Number (Including code No) of declaration forms lost/ | Name & Address of the dealer to whom declaration form's is / issued by the department with date of "C" forms issued | Registration Certification No. of the dealer under CST Act 1956 | The Address of the dealer to whom the declarations /are sent | Date of issue of Forms by the Dealer | Whether lost/stolen/ destroyed | Remarks |
|---|---|---|---|---|---|---|---|
| 1 | SL No. TCK 2824807 | M/s, Balaji Auto tech Pvt Ltd. Mysuru | 20580459 (TIN- 29290489751) | M/s, Advance Cooling Systems Pvt, Ltd Mumbai-400102 | 03-09-2005 | Lost | Duly completed form |

**PR. 915** Deputy Commissioner of Commercial Taxes (Audit-1),
**SC. 05** Mysuru Division, Mysuru.

## ವಾಣಿಜ್ಯ ತೆರಿಗೆಗಳ ಇಲಾಖೆ

### ವಾಣಿಜ್ಯ ತೆರಿಗೆ ಅಧಿಕಾರಿ, ಉಪಮೌಲ್ಯವರ್ಧಿತ ತೆರಿಗೆ ಕಛೇರಿ– 193, ಹುಣಸೂರು, ಇವರ ಕಛೇರಿಯ ನಡವಳಿಗಳು

**ಪ್ರಸ್ತುತ :** ಹೆಚ್.ಎನ್. ನಟರಾಜ್,
ವಾಣಿಜ್ಯ ತೆರಿಗೆ ಅಧಿಕಾರಿ,
ವಿ.ಎಸ್.ಓ–193,
ಹುಣಸೂರು.

**ವಿಷಯ :** ಮೆ॥ ಮಣಿಯೋಗ್ ಟೆಕ್ಸ್‌ಟೈಲ್ಸ್ ಪ್ರೈ.ಲಿ., ಪಿರಿಯಾಪಟ್ಟಣ/ತಾಲ್ಲೂಕು, ಟಿನ್ (29410800667) ಇವರ "E-1" ನಮೂನೆಗಳು ಕಳೆದುಹೋಗಿರುವ ಬಗ್ಗೆ.

**ಉಲ್ಲೇಖ :**
1) ವರ್ತಕರ ಮನವಿ ಪತ್ರ ದಿನಾಂಕ: 30.10.2014.
2) ಈ ಕಛೇರಿಯ ಹಿಂಬರಹ ಪತ್ರ ಸಂಖ್ಯೆ: ವಾತೆಅ/ವಿಎಸ್‌ಓ–193/ಟಿ–1624/14–15, ದಿನಾಂಕ: 7.11.2014.
3) ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು, 1957 ನಿಯಮ–12.(2)

**ಪ್ರಸ್ತಾವನೆ :**

ಮೆ॥ ಮಣಿಯೋಗ್ ಟೆಕ್ಸ್‌ಟೈಲ್ಸ್ ಪ್ರೈ.ಲಿ., #2, ಸೀಗೂರು ಗ್ರಾಮ ಪಿರಿಯಾಪಟ್ಟಣ ತಾಲ್ಲೂಕು , ಮೈಸೂರು ಜಿಲ್ಲೆ, (Sri Ganesh Spinners a Unit of M/s Maniyog Textiles Pvt Ltd.,) TIN : 29410800667 ಇವರು ಉಲ್ಲೇಖ (1) ರ ಪತ್ರದಲ್ಲಿ ಸದರಿಯವರು **M/S Archana Textiles Corporations, Maharashtra, (TIN : 27150329132c)** ಇವರಿಗೆ 2010–11ನೇ ಸಾಲಿಗೆ ಪೂರ್ಣವಾಗಿ ಭರ್ತಿ ಮಾಡಿ ನೀಡಲಾಗಿದ್ದ "E-1" ನಮೂನೆಗಳ ಮೂಲ ಪತ್ರ ಸಂಖ್ಯೆ Sl. E. No. 0106223, Sl. E. No. 0106226, Sl. E. No. 0106229, ಮತ್ತು Sl. E. No. 0106231, (ಒಟ್ಟು 4 ನಮೂನೆ)ಗಳು ಕಳೆದುಹೋಗಿರುವ ಹಿನ್ನೆಲೆಯಲ್ಲಿ ನಕಲಿ "E-1" ನಮೂನೆಗಳನ್ನು ನೀಡಬೇಕೆಂದು ಕೋರಿ ಪೂರಕವಾಗಿ ಕೆಳಕಂಡ ದಾಖಲೆಗಳು/ಪ್ರತಿಗಳನ್ನು ಕಛೇರಿಗೆ ಸಲ್ಲಿಸಿರುತ್ತಾರೆ.

1) **M/S Archana Textiles Corporations, Maharashtra** ಇವರ ಮಹಾರಾಷ್ಟ್ರ ರಾಜ್ಯದ ದಿನಪತ್ರಿಕೆಗಳಾದ **Daily Agradhoot** ಮತ್ತು **Rashtrageet** ಎಂಬ ದಿನಪತ್ರಿಕೆಗಳಲ್ಲಿ ದಿ: 03.09.2014 ರಂದು ಪತ್ರಿಕಾ ಪ್ರಕಟಣೆ ನೀಡಿರುವ ಪತ್ರಿಕೆಗಳ ಪ್ರತಿಗಳು.
2) "E-1" ನಮೂನೆಗಳು ಕಳೆದುಹೋಗಿರುವುದಕ್ಕೆ ಸ್ಥಳೀಯ ಠಾಣಾಧಿಕಾರಿ, ಪೊಲೀಸ್ ಉಪನಿರೀಕ್ಷಕರು, **Gavbhag Police Station, Ichalkaranji, Hatkangale Taluk, Kolhapur District, Maharashtra State 416115,** ಇವರಲ್ಲಿ ದಾಖಲಿಸಿರುವ ಎಫ್.ಐ.ಆರ್. ಪ್ರತಿ.
3) ಸದರಿ "E-1" ನಮೂನೆಗಳಿಗೆ ಸಂಬಂಧಿಸಿದಂತೆ ತೆರಿಗೆ ಬಾಧ್ಯತೆ ಭರಿಸುವುದಾಗಿ **M/S Archana Textiles Corporation, Maharashtra,** ಇವರು ನೀಡಿರುವ Indemnity Bond ಪ್ರತಿ.
4) M/S Maniyog Textiles Pvt Ltd**.**, Periyapatna ಇವರು ಈ ಪ್ರಕರಣದಲ್ಲಿ ತೆರಿಗೆ ಬಾಧ್ಯತೆ ಬಂದ ಪಕ್ಷದಲ್ಲಿ ತೆರಿಗೆಯನ್ನು ಇಲಾಖೆಗೆ ಭರಿಸುವುದಾಗಿ ಪ್ರಮಾಣೀಕರಿಸಿ ಸಲ್ಲಿಸಿರುವ Indemnity Bond.

**ಆದೇಶ ಸಂಖ್ಯೆ: ವಾಣಿಜ್ಯ ತೆರಿಗೆ ಅಧಿಕಾರಿ, ಸ್ಥ.ಮೌ.ತೆ–193/ಸಂಖ್ಯೆ: 19/2015–16, ದಿನಾಂಕ: 14–09–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕೇಂದ್ರ ಮಾರಾಟ ತೆರಿಗೆ ನಿಯಮಾವಳಿಗಳು, 1956 ನಿಯಮ 12(2) ರಂತೆ ಮೇ॥ ಮಣಿಯೋಗ್ ಟೆಕ್ಸ್‌ಟೈಲ್ಸ್ ಪ್ರೈ.ಲಿ., ಪಿರಿಯಾಪಟ್ಟಣ, (Sri Ganesh Spinners a Unit of M/s Maniyog Textiles Pvt Ltd.,) ಇವರಿಗೆ ಈ

ಕಛೇರಿಯಿಂದ ನೀಡಲಾಗಿದ್ದ "E-1" ನಮೂನೆಗಳ ಸಂಖ್ಯೆಗಳು : ಸಂಖ್ಯೆ SI.E. No. 0106223, SI. E. No. 0106226, SI. E. No. 0106229, ಮತ್ತು SI. E. No. 0106231, (ಒಟ್ಟು 4 ನಮೂನೆ)ಗಳನ್ನು ರದ್ದುಗೊಳಿಸಿ ಆದೇಶಿಸಲಾಗಿದೆ.

ವಾಣಿಜ್ಯ ತೆರಿಗೆ ಅಧಿಕಾರಿ,
ವಿ.ಎಸ್.ಓ–193, ಹುಣಸೂರು.

## COMMERCIAL TAX DEPARTMENT

### OFFICE OF THE COMMERICIAL TAX OFFICER, V.S.O,-193, KALLIESHWARA COMPLEX, GOKUL ROAD, HUNSUR-571105.

### NOTIFICATION No. ..... CTO, V.S.O,-193/15-16, DATED: 14.09.2015.

**Notified Authority Under Rules 6(1) of the CST (Karnataka) Rules 1957.**

By virtue of the provisions of Rule, 12(2) of the CST (R&T) Rules, 1957, it is hereby notified for general information that the declaration in "E-1" forms shown below are declared to be lost in the custody of selling dealer and also to be obsolete and invalid.

| Sl. No. | Number (Including code No.) of declaration forms lost/destroyed/stolen. | Name & Address of the dealer to whom declaration forms is /are issued by the department with date of "E-1" form issued. | Registration Certificate No. of the dealer under CST Act 1956 | The Address of the dealer to who the declarations /are sent | Date of issue of Forms by the dealer | Whether lost/stolen destroyed | Remarks |
|---|---|---|---|---|---|---|---|
| 1 | SI. E.No. 0106223 | M/s. Maniyog Textiles Pvt Ltd. Periyapatna-571107 | 29410800667 | M/s. Archana Textile Corporation.Ichalkarangi, Maharastra-416115, TIN : 27150329132C | 08-04-2011 | Lost | Duly completed form |
| 2 | SI. E.No. 0106226 | -do- | -do- | -do- | 08-04-2011 | Lost | -do- |
| 3 | SI. E.No. 0106229 | -do- | -do- | -do- | 08-04-2011 | Lost | -do- |
| 4 | SI. E.No. 0106231 | -do- | -do- | -do- | 08-04-2011 | Lost | -do- |

**PR. 917**
**SC. 05**

**H.N. NATARAJ**
Commercial Tax Officer,
V.S.O-193, Hunsur.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 179 ಸಿಜಿಇ 2015, ಬೆಂಗಳೂರು, ದಿನಾಂಕ :23–09–2015.**

ರಾಜ್ಯ ಸರ್ಕಾರವು ತುರ್ತು ಸ್ಥಿತಿಯಲ್ಲಿ ಸಮಗ್ರ ತುರ್ತು ನಿರ್ವಾಹಣಾ ಪ್ರತಿಕ್ರಿಯೆ ಸೇವೆಯನ್ನು ಸಾರ್ವಜನಿಕರಿಗೆ ತುರ್ತು ಸಂದರ್ಭಗಳಾದ ರಸ್ತೆ ಅಪಘಾತ, ವೈದ್ಯಕೀಯ, ಅಗ್ನಿದುರಂತದಂತಹ ಸಂದರ್ಭಗಳಲ್ಲಿ ಅನುಕೂಲವಾಗಲು ಖಾಸಗಿ ಸಹಭಾಗಿತ್ವದಲ್ಲಿ ಆರೋಗ್ಯ ಕವಚ– 108 ಆಂಬ್ಯುಲೆನ್ಸ್ ಸೇವೆಯನ್ನು ಸರ್ಕಾರದ ಆದೇಶ ಸಂಖ್ಯೆ ಆಕುಕ 10 ಎಸ್‌ಟಿಕ್ಯೂ 2007, ದಿನಾಂಕ: 11.08.2008ರ ಆದೇಶದಲ್ಲಿ ಇ.ಎಂ.ಆರ್.ಐ. ಸಂಸ್ಥೆಯವರ ಮೂಲಕ ಜಾರಿಗೊಳಿಸಲು ಮಂಜೂರಾತಿ ನೀಡಲಾಗಿದೆ, ದಿನಾಂಕ: 14.08.2008 ಮತ್ತು ತಿದ್ದುಪಡಿ ಆದೇಶ ದಿನಾಂಕ: 10.08.2012ರಲ್ಲಿ ಕರ್ನಾಟಕ ಸರ್ಕಾರ ಮತ್ತು ಇ.ಎಂ.ಆರ್.ಐ ಸಂಸ್ಥೆಗೆ ವಾಹನಗಳ ನಿರ್ವಹಣೆ ಕರ್ತವ್ಯ ಜವಾಬ್ದಾರಿಯ ಬಗ್ಗೆ ಒಡಂಬಡಿಕೆಯಾಗಿರುತ್ತದೆ.

ಆರೋಗ್ಯ ಕವಚ 108 ಆಂಬ್ಯುಲೆನ್ಸ್ ವಾಹನಗಳಲ್ಲಿ ಇ.ಎಂ.ಟಿ ಮತ್ತು ಪೈಲೆಟ್‌ಗಳು ಕರ್ತವ್ಯ ನಿರ್ವಹಿಸುತ್ತಿದ್ದು, ಆರೋಗ್ಯ ಕವಚ 108 ಆಂಬ್ಯುಲೆನ್ಸ್ ಸೇವೆಯು ದಿನದ 24 ಗಂಟೆ 365 ದಿನಗಳು ಸಾರ್ವಜನಿಕ ಸೇವೆಗೆ ಲಭ್ಯವಿದ್ದು, ಸದರಿ ವಾಹನಗಳ ನಿರ್ವಹಣೆಗೆ ಅನುದಾನವನ್ನು ಸರ್ಕಾರದಿಂದ ಭರಿಸಲಾಗುತ್ತಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಆರೋಗ್ಯ ಕವಚ 108 ಆಂಬ್ಯುಲೆನ್ಸ್ ಸೇವೆಯು ಪೋಲೀಸ್, ವೈದ್ಯಕೀಯ ಅಗ್ನಿದುರಂತ, ಗರ್ಭಿಣಿ ಸ್ತ್ರೀಯರು ಮತ್ತು ಹೆರಿಗೆ ಸಂಬಂಧಿತ ತುರ್ತು ಸೇವೆಯನ್ನು ಸಾರ್ವಜನಿಕರಿಗೆ ಒದಗಿಸುತ್ತಿರುವುದರಿಂದ ಸದರಿ ಸೇವೆಯು ಅತ್ಯಾವಶ್ಯಕ ಸೇವೆಯಾಗಿರುತ್ತದೆ.

ಕರ್ತವ್ಯ ನಿರ್ವಹಿಸುತ್ತಿರುವ ಇ.ಎಂ.ಟಿ. ಪೈಲೆಟ್‌ಗಳು ಹಲವಾರು ಬೇಡಿಕೆಗಳನ್ನು ಈಡೇರಿಸಲು ಪದೇ ಪದೇ ಮುಷ್ಕರ ಹೂಡುತ್ತಿದ್ದು, ಈ ಅತ್ಯವಶ್ಯಕವಾದ ತುರ್ತು ಸೇವೆಯನ್ನು ಸಾರ್ವಜನಿಕರಿಗೆ ಸಮರ್ಪಕವಾಗಿ ಒದಗಿಸುವಲ್ಲಿ ತೊಂದರೆಯಾಗುತ್ತಿರುತ್ತದೆ. ಅಲ್ಲದೇ 108 ಆಂಬ್ಯುಲೆನ್ಸ್‌ಗೆ ಸಂಬಂಧಿಸಿದ ಎಲ್ಲಾ ಸೇವೆಗಳು "ಸಂವಿಧಾನದ ಏಳನೇ ಅನುಸೂಚಿಯ II ನೇ ಪಟ್ಟಿಯಡಿಯಲ್ಲಿ ರಾಜ್ಯ ವಿಧಾನಮಂಡಲವು ಕಾನೂನುಗಳನ್ನು ರಚಿಸಲು ಅಧಿಕಾರ ಹೊಂದಿದೆ. ಆದ್ದರಿಂದ, ಈ ವಿಷಯಕ್ಕೆ ಸಂಬಂಧಿಸಿದಂತಹ ಕೆಲಸ ಮಾಡಲು ನಿರಾಕರಿಸಿದರೆ, ಸಾರ್ವಜನಿಕ ಬಳಕೆ ಸೇವೆಗಳನ್ನು ಅಥವಾ ಸಾರ್ವಜನಿಕ ಭದ್ರತೆಯನ್ನು ನಿರ್ವಹಿಸಿಕೊಂಡು ಬರುವುದಕ್ಕೆ ಅಥವಾ ಸಮುದಾಯದ ಜೀವನಕ್ಕೆ ಅವಶ್ಯವಾದ ಸರಬರಾಜುಗಳನ್ನು ಹಾಗೂ ಸೇವೆಯನ್ನು ನಿರ್ವಹಿಸಿಕೊಂಡು ಬರುವುದಕ್ಕೆ ತೊಂದರೆ ಉಂಟಾಗುತ್ತದೆ ಅಥವಾ ಸಮುದಾಯವನ್ನು ಬಹಳ ಕಷ್ಟಕ್ಕೆ ಈಡು ಮಾಡುತ್ತದೆ ಎಂದು ಸರ್ಕಾರವು ಅಭಿಪ್ರಾಯಪಡುತ್ತದೆ.

ಆದ್ದರಿಂದ, ಕರ್ನಾಟಕ ಅತ್ಯಾವಶ್ಯಕ ಸೇವೆಗಳ ನಿರ್ವಹಣಾ ಅಧಿನಿಯಮ, 2013 (2015ರ ಕರ್ನಾಟಕ ಅಧಿನಿಯಮ 25) ರ 2ನೇ ಪ್ರಕರಣದ, (1)ನೇ ಉಪ ಪ್ರಕರಣದ (ಎ) ಖಂಡದ (iii) ನೇ ಉಪ ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಜ್ಯ ಸರ್ಕಾರವು 108 ಆಂಬ್ಯುಲೆನ್ಸ್ ಸೇವೆಗೆ ಸೇರಿದ ಎಲ್ಲಾ ಸೇವೆ ಅಥವಾ ಉದ್ಯೋಗ ವರ್ಗಗಳನ್ನು ಈ ಅಧಿನಿಯಮದ ಉದ್ದೇಶಗಳಿಗಾಗಿ ಅತ್ಯಾವಶ್ಯಕ ಸೇವೆ ಎಂದು ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ವಿ.ಕಲಾವತಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

(ಆರೋಗ್ಯ 1 &2)

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR. 918**

**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59